# ಶಿಕ್ಷಣದ ಜತೆಗಿನ ಸಾಂಗತ್ಯ......

ಶರದ್ ಬೆಹಾರ್

ಕಲಿಕೆ ಎಂದರೆ ನನಗೆ ಇಷ್ಟ. ಕಲಿಕೆಯು ಶಿಕ್ಷಣದ ಹೃದಯ ಮತ್ತು ಆತ್ಮ. ಔಪಚಾರಿಕ, ಅನೌಪಚಾರಿಕ, ಸರಳ – ಹೀಗೆ ವಿವಿಧ ರೀತಿಯ ಶಿಕ್ಷಣದ ಜತೆಗಿನ ನನ್ನ ಜೀವನ ಪರ್ಯಂತದ ಪ್ರೀತಿಯನ್ನು ಈ ಕಲಿಕೆ ವಿವರಿಸುತ್ತದೆ. ಈಗ ನನ್ನ ಪ್ರೀತಿಯ ಬದುಕಿನ ಚೂರುಗಳ ಕಡೆಗೆ ಇಣುಕು ನೋಟ ಬೀರೋಣ. ಅದು ಅತ್ಯಂತ ಸವಾಲಿನ ಮತ್ತು ಅಷ್ಟೇ ತೃಪ್ತಿಕರ ಜೀವನ. ಕೆಲವೊಮ್ಮೆ ಭಾರೀ ಹತಾಶೆಯಂತೆ, ನಿರಂತರ ನಿರಾಶೆಯಂತೆ, ಸರಿಪಡಿಸುವುದಕ್ಕೂ ಸಾಧ್ಯವಿಲ್ಲದಷ್ಟು ಕೆಟ್ಟು ಹೋದಂತಹ ಅನುಭವ. ಆದರೆ ಇವೆಲ್ಲದರ ಹೊರತಾಗಿ ಮೋಡಗಳು ಸರಿದಾಗ, ನಿರೀಕ್ಷೆ ಮತ್ತು ಉತ್ಸಾಹದ ಸೂರ್ಯ ನಡುನೆತ್ತಿಯಲ್ಲಿ ಉರಿವಂತೆ ಪ್ರಖರಗೊಳ್ಳುತ್ತಿದ್ದ. ಸಹಪಾಠಿಗಳ, ಕಿರಿಯರ, ಕೆಲವೊಮ್ಮೆ ಹಿರಿಯರ ಕಲಿಕೆಗೆ ಸೌಲಭ್ಯವೊದಗಿಸುವಲ್ಲಿನ ನೋವು –ನಲಿವುಗಳ ಆಕರ್ಷಕ ಅನುಭವವನ್ನು ಈಗ ಸದ್ಯಕ್ಕೆ ಬದಿಗಿಡುತ್ತೇನೆ. ಮೂರನೆಯ ತರಗತಿಯಲ್ಲಿದ್ದಾಗ ಅದೆಲ್ಲ ಆರಂಭ ಆಗಿ ನಾನು ವಿದ್ಯಾರ್ಥಿ ಆಗಿರುವಲ್ಲಿವರೆಗೆ ಮುಂದುವರಿಯಿತು.

ಈ ಕಾಲಘಟ್ಟದ ಬಗ್ಗೆ, ಅದರಲ್ಲೂ ಔಪಚಾರಿಕ ಶಿಕ್ಷಕನಾಗಿದ್ದ ನನ್ನ ಪಾತ್ರ ಮತ್ತು ಅಂತಸ್ತಿನ ಕುರಿತು ಈ ಎರಡು ಕಂತಿನಲ್ಲಿ ಕಿರು ಉಲ್ಲೇಖ ಅಗತ್ಯ. 1954–55ರಲ್ಲಿ ನಾನು 11ನೇ ತರಗತಿ ವಿದ್ಯಾರ್ಥಿಯಾಗಿದ್ದೆ. ಆಗ ಶಾಲಾ ಸಂಸತ್ತಿನ ಮುಖ್ಯಮಂತ್ರಿಯಾಗಿದ್ದ ನನಗೆ ಸರಕಾರಿ ಪ್ರೌಢಶಾಲೆಯ ಸ್ವ–ಆಡಳಿತ ದಿನದಂದು ಒಂದು ದಿನದ ಮಟ್ಟಿಗೆ ಮುಖ್ಯೋಪಾಧ್ಯಾಯನಾಗುವ ಅಪೂರ್ವ ಅವಕಾಶ. ಆ ದಿನ ನಾನು ಎಂಟನೆಯ ತರಗತಿಯ ಮಕ್ಕಳಿಗೆ ಇಂಗ್ಲಿಷ್ ಪಾಠ ಮಾಡಿದೆ. ನನ್ನ ಸ್ವಘೋಷಿತ ಪ್ರತಿಭೆ ಮತ್ತು ತೃಪ್ತಿಯ ಅಧ್ಯಾಪಕನ ಪಾತ್ರದ ಸಂತೋಷವು ಒಂದು ದಿನದ ಮಟ್ಟಿಗೆ ಮುಖ್ಯೋಪಾಧ್ಯಾಯನಾಗುವ ನನ್ನ ಹೆಮ್ಮೆಯನ್ನು ಬಹುಶಃ ಹಿಂದಿಕ್ಕಿತ್ತು.

ಅತ್ಯಂತ ಕಿರು ಅವಧಿಯ ಔಪಚಾರಿಕ ಶಿಕ್ಷಣದ ಜತೆಗಿನ ನನ್ನ ಆತ್ಮೀಯ ಅನುಭವದ ನಂತರ ನನ್ನ ಸಾಂಗತ್ಯ ಹೆಚ್ಚಾಗಿ ಒಬ್ಬ ಶಾಲಾ ಅಧ್ಯಾಪಕನಾಗಿಯಷ್ಟೇ ಇತ್ತು. 1957–59ರ ಅವಧಿಯಲ್ಲಿ ನಾನು ಸ್ನಾತಕ ಪದವಿ ವಿದ್ಯಾರ್ಥಿಯಾಗಿದ್ದೆ. ಬಹುಶಃ ಶಾಲಾ ಸ್ವ–ಆಡಳಿತ ದಿನದ ಒಂದು ದಿನ ಅಧ್ಯಾಪಕನಾಗಿದ್ದ ಆನಂದದ ಹಳಹಳಿಕೆಯಿಂದ ಆಗ ಸ್ಫೂರ್ತಿಗೊಂಡಿದ್ದೆ ಎನ್ನಿಸುತ್ತದೆ. ಹಾಗಾಗಿ ನಾನು ಕಲಿಯುತಿದ್ದ ನಾಗಪುರದ (ಸರಕಾರಿ ಅನುದಾನಿತ ಆದರೆ ಖಾಸಗಿ ಆಡಳಿತದ) ಹಿಸ್ಲೊಪ್ ಕಾಲೇಜಿನವರು ನಡೆಸುತ್ತಿದ್ದ ರಾತ್ರಿ ಶಾಲೆಯಲ್ಲಿ ಇಂಗ್ಲಿಷ್ ಅಧ್ಯಾಪಕನಾಗಿ ಸ್ವಯಂಸೇವೆಯಿಂದ ಕೆಲಸ ಮಾಡುವುದಾಗಿ ಹೇಳಿದೆ. ಆವತ್ತು ಅದು ಶಿಕ್ಷಣಕ್ಕೆ ವಿದಾಯ ಹೇಳುವವರ ಸಂಖ್ಯೆ ಹೆಚ್ಚಾಗಿದ್ದ ಶಾಲೆ. ಆದರೆ ಈವತ್ತು ನಾನು ಅದನ್ನು ಶಾಲೆಗೆ ಸೇರುವವರ ಸಂಖ್ಯೆ ಹೆಚ್ಚಾಗಿರುವವರ ಶಾಲೆ ಎಂದು

ಕರೆಯುತ್ತೇನೆ. ಅಲ್ಲಿಗೆ ಬರುತ್ತಿದ್ದವರಲ್ಲಿ ಹೆಚ್ಚಿನವರು ಹದಿಹರಯದವರು ಮತ್ತು ಹತ್ತಿಯ ಕಾರ್ಖಾನೆಗಳಲ್ಲಿ, ನಗರದ ಸುತ್ತಮುತ್ತಲಿನ ಕೈಗಾರಿಕೆಗಳಲ್ಲಿ ದುಡಿಯುತ್ತಿದ್ದ ಜವ್ವನಿಗರು. ಒಂಬತ್ತನೆಯ ಮತ್ತು ಹತ್ತನೆಯ ತರಗತಿಯ ವಿದ್ಯಾರ್ಥಿಗಳ ಬೋಧನೆ ಮತ್ತು ಕಲಿಕೆಯಲ್ಲಿ ನಾನು ಸಂತಸ ಅನುಭವಿಸಿದೆ. ಇದು ಒಳ್ಳೆಯ ಅಧ್ಯಾಪಕ ಎನ್ನುವ ನನ್ನ ಸ್ವ–ಚಿತ್ರವನ್ನು ಇನ್ನಷ್ಟು ಗಟ್ಟಿಯಾಗಿಸಿತು. ಶಿಕ್ಷಣದಲ್ಲಿನ ಅಸಮಾನತೆಯ ಅರಿವಿರಲಿಲ್ಲ. ಸಾಮಾಜಿಕ ಮತ್ತು ಆರ್ಥಿಕ ಸೌಲಭ್ಯವಂಚಿತರಿಗೆ ಕಠಿಣ ಔಪಚಾರಿಕ ಶಾಲಾವ್ಯವಸ್ಥೆ ಎಷ್ಟೊಂದು ಅಸಮರ್ಪಕ ಎನ್ನವುದೂ ಅರ್ಥವಾಗಿರಲಿಲ್ಲ. ಅವರು ಶಿಕ್ಷಣದಿಂದ ಇನ್ನಷ್ಟು ದೂರವಾಗುತ್ತಿರುವ ಬಗ್ಗೆ, ಅವರ ಜಂಜಾಟದ ಬಗ್ಗೆ, ಅದೆಲ್ಲವನ್ನೂ ಸಂಭಾಳಿಸುತ್ತಿರುವುದರ ಬಗ್ಗೆ ನನ್ನಲ್ಲೇ ಒಂದು ಬಗೆಯ ಆತಂಕ ಮತ್ತು ಆಳವಾದ ಕಳಕಳಿ ಇತ್ತು.

ರಾತ್ರಿ ಶಾಲೆಯಲ್ಲಿ ಕಲಿಯುತ್ತಿದ್ದವರಲ್ಲಿ ಹೆಚ್ಚಿನವರು ಮರಾಠಿ ಮಾತಾಡುತ್ತಿದ್ದವರೇ ಆಗಿದ್ದರು. ಒಬ್ಬ ಇಂಗ್ಲಿಷ್ ಅಧ್ಯಾಪಕನಾಗಿ ನನಗೆ ಆ ಭಾಷೆಯಲ್ಲಿದ್ದ ಜ್ಞಾನ ಅತ್ಯಲ್ಪ. ದ್ವಿತೀಯ ಭಾಷೆ, ಅದರಲ್ಲೂ ವಿದೇಶಿ ಭಾಷೆಯನ್ನು ಕಲಿಸುವ ಶಿಕ್ಷಣಕ್ರಮದ ಅನೇಕ ಪಾಠಗಳನ್ನು ನಾನು ಕಲಿತೆ. ಮರಾಠಿಗೆ ಹೊರಳದೆ ಪಾಠಮಾಡುತ್ತಿದ್ದುದರಿಂದ ವಿದ್ಯಾರ್ಥಿಗಳು ಪಾಠಪುಸ್ತಕಗಳ ಅಧ್ಯಾಯಗಳಲ್ಲಿರುವ ವಿಚಾರಗಳಲ್ಲಷ್ಟೇ ಅಲ್ಲ, ಭಾಷೆಯಲ್ಲೂ ಪ್ರಾವೀಣ್ಯ ಸಂಪಾದಿಸಿದರು. ಈ ಸವಾಲಿನ ಹಿಂದೆಯೇ ನಿರಾಶೆ ಕೂಡ ಇತ್ತು. ಅದು ಕಲಿಸುವವರ ಮತ್ತು ಕಲಿಯುವವರ ನಿರಾಶೆ. ಯುರೇಕಾ ಕ್ಷಣಗಳಿಗಿಂತ ಪರಿಹರಿಸಲಾಗದ ಸವಾಲಿನ ಕ್ಷಣಗಳು ಅವು. ಅಂತಹ ಕ್ಷಣಗಳಲ್ಲೇ ಅವರ ಕಣ್ಣುಗಳಲ್ಲಿ ಬೆಳಕು ಮಿಂಚುವುದನ್ನು, ಮುಖ ಮತ್ತು ವರ್ತನೆಗಳಲ್ಲಿ ಒಂದು ಬಗೆಯ ಆನಂದ ತುಂಬಿ ತುಳುಕುವುದನ್ನು, ಸಾಧನೆಯ ಸಂತೋಷ ಹರಿಯುವುದನ್ನು ಗುರುತಿಸುತ್ತಿದ್ದೆ. ಹಿಂದಿನ ಅನೇಕ ವಿಫಲ ಪ್ರಯತ್ನಗಳಿಗೆ ಪರ್ಯಾಯವಾಗಿದ್ದ ಆ ಕ್ಷಣಿಕ ಸಂತೋಷ. ಅದು ನಿರಾಶೆಗೆ ಪರಿಹಾರವಾಗಿ ಕಾಣಿಸುತ್ತಿದ್ದುದರಿಂದ ಅತ್ಯುತ್ತಮ ಎನ್ನಿಸತೊಡಗಿತ್ತು. ಆ ಆನಂದ ನನ್ನಲ್ಲಿ ಇದ್ದಬದ್ದ ಅತ್ಯಲ್ಪ ಮಟ್ಟದ ಕ್ರಿಯಾಶೀಲತೆಯನ್ನು ಅದರ ಗರಿಷ್ಠದ ವರೆಗೆ ವಿಸ್ತರಿಸುತ್ತಿತ್ತು.

ಮಾಜಿ ಸ್ವಯಂಸೇವಕ–ಶಾಲಾ ಅಧ್ಯಾಪಕನಿಂದ ಆಡಳಿತ ನಿರ್ವಾಹಕ ಮತ್ತು ಸಿಹೋರಾ ಉಪ ವಿಭಾಗದ ಐನೂರು ಗ್ರಾಮೀಣ ಶಾಲೆಗಳ ನಾಯಕನ ಸ್ಥಾನಕ್ಕೆ ಇದ್ದಕ್ಕಿದ್ದ ಹಾಗೆ ಜಿಗಿದಿದ್ದೆ. ಈ ಉಪ ವಿಭಾಗ ಜಬಲ್‌ಪುರ್ ಜಿಲ್ಲೆಯ ನಾಲ್ಕು ಸಮುದಾಯ ಅಭಿವೃದ್ಧಿ ಬ್ಲಾಕ್‌ಗಳನ್ನೂ ಒಳಗೊಂಡಿತ್ತು. ಇದು ಮುಂದೆ 1961ರಲ್ಲಿ ನಾನು ಐಎಎಸ್ ಸೇರಲು ಸಹಕಾರಿ ಆಯಿತು. ಅದೇ ರೀತಿ 1963ರಲ್ಲಿ (1965ರ ವರೆಗೆ) ಎಸ್‌ಡಿಎಂ ಹುದ್ದೆಗೇರುವುದಕ್ಕೂ ಅನುಕೂಲ ಆಯಿತು. ಆಗ ಶಾಲಾ ಶಿಕ್ಷಣವು ಪ್ರಜಾಪ್ರಭುತ್ವೀಯ ವಿಕೇಂದ್ರೀಕರಣ ವ್ಯವಸ್ಥೆಯ ಭಾಗವೇ ಆಗಿದ್ದು, ಅದರಲ್ಲಿ ಉಪವಿಭಾಗೀಯ ಮಟ್ಟದ ಜನಪದ ಸಭಾ ಎಂಬ ಚುನಾಯಿತ ಸ್ಥಳೀಯ ಸಂಸ್ಥೆಯು ಹೆಚ್ಚಿನ ಅಧಿಕಾರ ಹೊಂದಿದ್ದು, ಎಲ್ಲ ಬಗೆಯ ಅಭಿವೃದ್ಧಿ ಕ್ಷೇತ್ರಗಳಲ್ಲೂ ಕಾರ್ಯನಿರ್ವಹಿಸುತ್ತಿತ್ತು. ನಾನೊಬ್ಬ ಎಸ್‌ಡಿಎಂ ಆಗಿರುತ್ತಾ ಕಾನೂನು ಪ್ರಕಾರ ಅದರ ಮುಖ್ಯ ಕಾರ್ಯನಿರ್ವಹಣ ಅಧಿಕಾರಿಯೂ

ಆಗಿದ್ದೆ. ಅಧಿಕಾರದ ತಳಮಟ್ಟದಲ್ಲಿ ಶಾಲಾ ಶಿಕ್ಷಣದ ಅನುಭವ ಪಡೆಯುವುದಕ್ಕೆ ಮತ್ತು ಅದಕ್ಕಾಗಿ ಕೆಲಸ ಮಾಡುವುದಕ್ಕೆ ಇದು ನನಗೆ ಮಹತ್ವದ ಅವಕಾಶ ಒದಗಿಸಿತ್ತು.

ನಾನು ಅನುಷ್ಠಾನಗೊಳಿಸಬೇಕಾಗಿದ್ದ ರಾಜ್ಯನೀತಿಗೆ ಸಮಾನತೆ, ಸಾರ್ವತ್ರಿಕ ದಾಖಲಾತಿಯ ಒಳಗೊಳ್ಳುವಿಕೆ, ಹಾಜರಾತಿ ಮತ್ತು ಭಾಗವಹಿಸುವಿಕೆ ಇತ್ಯಾದಿ ಸಂಕೀರ್ಣ ಸಮಸ್ಯೆಗಳತ್ತ ಯಾವುದೇ ಕಾಳಜಿ ಇರಲಿಲ್ಲ. ಬರಹದ ಮಸಿ ಆರಿದ ತಕ್ಷಣ ಸಂವಿಧಾನದ 46ನೇ ವಿಧಿ ಬಹುಶಃ ಮರೆತೇ ಹೋಗಿದ್ದಿರಬೇಕೆನ್ನಿಸುತ್ತದೆ. ಶಾಲೆಗಳಲ್ಲಿ ಇದ್ದವರೂ ನಿರ್ಲಕ್ಷಿತರ ಕಡೆಗೆ ಗಮನ ಕೊಡದೇ ಇದ್ದಂತಹ ಪರಿಸ್ಥಿತಿ. ಅಂತಹ ಹೊತ್ತಿಗೆ ನಾನು ವಂಚಿತರಿಗಾಗಿ ಶಿಕ್ಷಣದ ಗುಣಮಟ್ಟ ಸುಧಾರಿಸುವ ಕಾರ್ಯಸೂಚಿಯನ್ನು ಬಹಳ ಸಂತೋಷದಿಂದಲೇ ಸ್ವೀಕರಿಸಿಕೊಂಡೆ. ಈಗ ಅದನ್ನೆಲ್ಲ ಅವಲೋಕಿಸಿದರೆ ನನಗೇ ನಾಚಿಕೆಗೇಡು ಅಂತ ಅನ್ನಿಸುತ್ತದೆ. ಯಾಕೆಂದರೆ ನನಗೆ ನೀಡಲಾದ ರಾತ್ರಿ ಶಿಕ್ಷಣದಲ್ಲಿ ನಾನು ನಿಜಾರ್ಥದಲ್ಲಿ ಸಮಪರ್ಕವಾಗಿ ಅಸಮಾನತೆಯ ಪಾಠಗಳನ್ನು ಗ್ರಹಿಸಿಕೊಳ್ಳಲಿಲ್ಲ ಅನ್ನಿಸುತ್ತದೆ. ವ್ಯಂಗ್ಯ ಎಂದರೆ, ಸರ್ಕಾರದ ವ್ಯವಹಾರ ಯಂತ್ರದಲ್ಲಿ ಇದ್ದ ಬಹುತೇಕರು ಸ್ವಾತಂತ್ರ್ಯ ಹೋರಾಟಗಾರರಾಗಿದ್ದರು. ಅವರಿಗೆ ಅವರದ್ದೇ ಭಿನ್ನ ಭಿನ್ನ ಆದರ್ಶಗಳಿದ್ದುವು. ಸಮಾಜದ ಬಲಿಷ್ಠ ಮತ್ತು ಸಂವಹನಶೀಲ ವಿಭಾಗಗಳ ಬೇಡಿಕೆಗಳ ಮತ್ತು ಕಾರ್ಯಸೂಚಿಗಳ ಆಕರ್ಷಣೆಗೆ ಒಳಗಾಗಿದ್ದರು. ನಿರ್ಲಕ್ಷಿತರ ಮುಖದಿಂದ ಕಣ್ಣೀರೊರೆಸುವ ಗಾಂಧೀಜಿಯವರ ಅಮೂಲ್ಯ ನಿಧಿಯನ್ನು ಒಟ್ಟಾರೆ ಮರೆತೇ ಬಿಟ್ಟಂತಿದ್ದರು.

ತಮ್ಮ ನೆರವಿನ ಮೂಲಕ ಅದ್ಭುತಗಳನ್ನು ಸಾಧಿಸುವ ನಿರೀಕ್ಷೆ ಹೊತ್ತ, ಶಿಕ್ಷಣದ ಕುರಿತ ಆಳ ಆಸಕ್ತಿ ಇದ್ದ ಜನಪದದ ಅಧ್ಯಕ್ಷ ಮತ್ತು ಶಿಕ್ಷಣ ಸಮಿತಿಯ ಅಧ್ಯಕ್ಷರನ್ನು ಕಂಡಾಗ ನಾನು ಅತ್ಯಂತ ಸ್ಫೂರ್ತಿಗೊಂಡೆ. ಕೆಲವೇ ಸಮಯದಲ್ಲಿ ಅವರ ಆಸಕ್ತಿ ಎನ್ನುವುದು ಅತ್ಯಂತ ತೇಲು ಮಟ್ಟದ್ದು– ಶಿಕ್ಷಕರನ್ನು ವರ್ಗಾಯಿಸುವ ಮಟ್ಟದ್ದು ಮಾತ್ರ– ಎನ್ನುವುದನ್ನು ತಿಳಿದು ತೀರಾ ನಿರಾಶೆಗೊಂಡೆ. ಇದರ ಹಿಂದಣ ಒಳ ಪ್ರವಾಹವನ್ನು ಅರ್ಥೈಸಲು ತುಂಬಾ ಸಮಯ ತೆಗೆದುಕೊಂಡೆ. ರಾಜಕೀಯ ಶಕ್ತಿ ಮತ್ತು ಅಧ್ಯಾಪಕರ ಮಹತ್ವ ನಿಧಾನಕ್ಕೆ ನನ್ನ ಮೇಲೆ ಮೂಡತೊಡಗಿತು. ಅಧ್ಯಾಪಕರ ವರ್ಗಾವಣೆ ವ್ಯವಹಾರಗಳಿಂದ ನಾನು ದೂರವೇ ಉಳಿದೆ. ಕೇವಲ ಶಿಕ್ಷಣದ ಗುಣಮಟ್ಟ ಸುಧಾರಣೆಯ ಕಡೆಗೆ ಮಾತ್ರ ಗಮನ ಕೇಂದ್ರೀಕರಿಸಿದೆ. ಅದು ಈಗಿನದ್ದಕ್ಕಿಂತ ಹೆಚ್ಚು ತೃಪ್ತಿಕರವಾದ ಕೆಲಸವಾಗಿತ್ತು ಎನ್ನುವುದನ್ನು ನಾನು ಒಪ್ಪಿಕೊಳ್ಳಲೇಬೇಕಾಗುತ್ತದೆ. ಶಾಲೆಗಳಲ್ಲಿ ಉತ್ಸಾಹದ ಚಿಲುಮೆ ಚಿಮ್ಮಿಸುವ ಸಾಂಸ್ಕೃತಿಕ ಮತ್ತು ಕ್ರೀಡಾ ಚಟುವಟಿಕೆಗಳಿದ್ದುವು. ಇದು ನನ್ನ ಇನ್ನೊಂದು ಆಳ ಆಸಕ್ತಿಯ ಕ್ಷೇತ್ರ. ವಿವಿಧ ಶಾಲೆಗಳಲ್ಲಿ ಇದಕ್ಕಾಗಿ ನಾನು ಸಣ್ಣಮಟ್ಟಿನ ಆರ್ಥಿಕ ಸಹಾಯ ಮತ್ತು ಇತರ ನೆರವುಗಳೊಂದಿಗೆ ಪ್ರೋತ್ಸಾಹ ನೀಡಿದ್ದೂ ಇದೆ. ಆ ಕಾಲದಲ್ಲಿ ಟೆಲಿವಿಷನ್ ಇಲ್ಲದೇ ಇದ್ದದ್ದೂ, ಸಿನಿಮಾದ ಅತಿಕ್ರಮಣ ದಟ್ಟವಾಗಿ ಇಲ್ಲದಿದ್ದದ್ದೂ ಕಾರಣವಾಗಿ ಜನಪದ ಕಲೆ ಮತ್ತು ಸಂಸ್ಕೃತಿಯ ಪ್ರಕಾರಗಳು ಬಹಳ ಸಹಜವಾಗಿ ಮತ್ತು ಅನಾಯಾಸವಾಗಿ ಪಠ್ಯೇತರ ಚಟುವಟಿಕೆಗಳ ಜತೆಗೇ

ಬೆಳೆದು ಅದರ ಜನಪ್ರಿಯತೆಯನ್ನು ಇನ್ನಷ್ಟು ಹೆಚ್ಚಿಸಿದಂತೆ ತೋರುತ್ತದೆ. ಅದರ ಪ್ರತಿಫಲನ ಈಗ ಕಾಣಿಸುತ್ತದೆ.

ರಾಜಕೀಯದಲ್ಲಿ ಶಿಕ್ಷಕರ ವಿಶಿಷ್ಟ ಮತ್ತು ಅತ್ಯಂತ ಮಹತ್ವದ ಪಾತ್ರವನ್ನು ಅದೇ ಶಿಕ್ಷಣ ಕ್ಷೇತ್ರದಲ್ಲಿ ತಥಾಕಥಿತ ಅತ್ಯುತ್ಸಾಹದಿಂದ ಭಾಗವಹಿಸಿ ಕೆಲಸಮಾಡುವವರಿಗಿಂತ ರಾಜಕಾರಣಿಗಳೇ ಹೆಚ್ಚು ಅರ್ಥೈಸಿಕೊಂಡಿರುತ್ತಾರೆ ಮತ್ತು ಗುರುತಿಸಿರುತ್ತಾರೆ. ಇದನ್ನು ನಿರ್ಲಕ್ಷಿಸಿ ಯಾವುದೇ ಸುಧಾರಣೆಯನ್ನು ರೂಪಿಸಿದರೂ ಅಥವಾ ಹಸ್ತಕ್ಷೇಪವನ್ನು ಮಾಡಿದರೂ ಅದು ಹಸ್ತಕ್ಷೇಪದ ಒಡಕಲು ವಂಶವಾಹಿ ಎಂದೇ ಅರ್ಥ. ಇಂತಹ ಕಲಿಕೆ ಮುಂದಿನ ನೌಕರಿಗೆ ಅತ್ಯಂತ ಹೆಚ್ಚು ಉಪಯುಕ್ತ. ಮುಂದೆ ಶಿಕ್ಷಣ ಇಲಾಖೆಯ ಪ್ರಧಾನ ಕಾರ್ಯದರ್ಶಿ ಆಗಿದ್ದಾಗ ಅಥವಾ ಏಕಲವ್ಯದ ಸ್ಥಾಪಕ ನಿರ್ದೇಶಕನಾಗಿದ್ದಾಗ ಇದರಲ್ಲಿ ಅತ್ಯಂತ ಯಶಸ್ವಿಯಾಗಿ ವ್ಯವಹರಿಸಿ ಹೊಸತನಗಳನ್ನು ಜ್ಯಾರಿಗೊಳಿಸಿದ್ದೇನೆ ಎಂದು ನಾನು ಹೇಳಲಾರೆ.

ಶಿಕ್ಷಣದ ಕುರಿತ ನನ್ನ ವಿಚಿತ್ರ ಆಸಕ್ತಿಗೆ ಎರಡು ಅನಿರೀಕ್ಷಿತ ತದ್ವಿರುದ್ಧದ ಪರಿಣಾಮಗಳು ಇದ್ದುವು.  ಸಾಂಪ್ರದಾಯಿಕ ಆಡಳಿತಕ್ಕೆ ಯಾವುದೇ ಉತ್ಕೃಷ್ಟ ಕೆಲಸವೂ ಕೂಡ ಬೆಲೆಬಾಳುವಂಥದ್ದೂ ಎಂದು ಅನ್ನಿಸುವುದೇ ಇಲ್ಲ. ಯಾಕೆಂದರೆ ಅದರ ಗಮನ ಮುಖ್ಯವಾಗಿ ಆಡಳಿತ ಯಂತ್ರವೇ ಆಗಿರುತ್ತದೆ. ನನ್ನ ವಾರ್ಷಿಕ ಮೌಲ್ಯಮಾಪನ ವರದಿಯಲ್ಲಿನ ವಿರೋಧಿ ನೆಲೆಯ ಟೀಕೆಯಿಂದ ಸ್ವಲ್ಪದರಲ್ಲೇ ಪಾರಾದೆ. ಇದಕ್ಕಾಗಿ ನನ್ನ ಹಿರಿಯ ಸಹೋದ್ಯೋಗಿ ಮತ್ತು ಆಗಿನ ಜಿಲ್ಲಾ ಮ್ಯಾಜಿಸ್ಟ್ರೇಟ್ ಆಗಿದ್ದ ಶ್ರೀ ಆರ್. ನಾಯ್ಡು ಅವರಿಗೆ ಕೃತಜ್ಞತೆ ಹೇಳಬೇಕು. ಅವರು ಅತ್ಯಂತ ಅನುಭವಿ ಮತ್ತು ಅತ್ಯುತ್ತಮ ಅಧಿಕಾರಿ ಆಗಿದ್ದರು. ಅವರಿಗೆ ನನ್ನ ಬಗ್ಗೆ ಪ್ರೀತಿ ಮತ್ತು ಆತ್ಮೀಯತೆ ಇತ್ತು. ಶಿಕ್ಷಣ ಕ್ಷೇತ್ರದ ನನ್ನ ಸ್ವ–ಮೌಲ್ಯಮಾಪನ ವರದಿ ಮತ್ತು ಸಾಧನೆಗಳ ಮುಖ್ಯಾಂಶಗಳ ಕಡೆಗೆ ನೋಡುತ್ತಾ ಅವರು ಮೌಖಿಕವಾಗಿ ನನ್ನನ್ನು ಎಚ್ಚರಿಸಿದರು ಮತ್ತು ಸೂಕ್ತ ಆಡಳಿತಾತ್ಮಕ ದೃಷ್ಟಿಕೋನ ಅಥವಾ ಮಾನದಂಡಗಳಿಂದ ಪ್ರಾಧಾನ್ಯ ಮತ್ತು ಗಮನವನ್ನು ಹೇಗೆ ರೂಪಿಸಬೇಕೆಂದು ಹೇಳಿಕೊಟ್ಟರು.

ಅದು ಉಪವಿಭಾಗೀಯ ಮ್ಯಾಜಿಸ್ಟ್ರೇಟರು ಅಷ್ಟಾಗಿ ಸುದ್ದಿ ಪತ್ರಿಕೆಗಳ ವರದಿಗಳಲ್ಲಿ ಕಾಣಿಸಿಕೊಳ್ಳದಿದ್ದ ಕಾಲ. ಈ ವಿಶಿಷ್ಟ ಗೌರವ ನನಗೆ ಒದಗಿ ಬಂದಾಗ ಅದರ ಪರಿಣಾಮ ವಿಪರೀತ ಆಗಿತ್ತು. ನನ್ನ ಸಿಟ್ಟು, ಅನಿಯಂತ್ರಿತ ಬಯ್ಗುಳ ಮತ್ತು ವರ್ತನೆ ಕಾರಣದಿಂದ ಜನಪದ ಸಭಾದ ಮೇಲ್ವಿಚಾರಕರು ಹೃದಯಾಘಾತಗೊಂಡರು ಎಂದು ವರದಿ ಮಾಡಿತು. ಇದು ನನ್ನ ಪರಿಚಯದವರ ನಡುವೆ ಗುರುತಿಸಿಕೊಂಡಿದ್ದ ನನ್ನ ಯಾವತ್ತಿನ ಸ್ವಭಾವವಾದ ಮೃದುತನ, ಸಜ್ಜನಿಕೆ, ಕರುಣೆ ಮತ್ತು ಸಹನೆಯ ಇತ್ಯಾದಿಗಳಿಗಿಂತ ಭಿನ್ನ ವ್ಯಕ್ತಿತ್ವ.  ಮುಖ್ಯವಾಗಿ ಆ ಘಟನೆಯ ಕುರಿತು ಪ್ರತಿಯೊಬ್ಬರಿಗೂ ವಿವರಿಸಿ ಹೇಳಬೇಕಾದ ಕಠಿಣ ಸಂದರ್ಭ ನನ್ನದಾಗಿತ್ತು.. ಅದು ವೈಭವೀಕರಣಕ್ಕೆ ಒಳಗಾದ ವಾಸ್ತವ.

ರಾತ್ರಿ 9.30ರ ಹೊತ್ತಿಗೆ ಅಂದರೆ ಎಲ್ಲ ಶಾಲೆಗಳು ಭಾಗವಹಿಸುವ ವಾರ್ಷಿಕ ಪಂದ್ಯಾವಳಿ ಉದ್ಘಾಟನೆಯಾಗುವುದಕ್ಕೆ ಮುಂಚೆ ನಾನು ಅಲ್ಲಿಗೆ ಭೇಟಿ ನೀಡಿದೆ. ಬಹುಶಃ ಅದು ಎಸ್‌ಡಿಎಂ

ಮತ್ತು ಸಿಇಓ ಮಟ್ಟಿಗೆ ಅಭೂತಪೂರ್ವ ಭೇಟಿ. ಹಾಗಾಗಿ ಅದು ಅನಿರೀಕ್ಷಿತ ಕೂಡ. ಈ ಉದ್ದೇಶಕ್ಕಾಗಿ ಕಾರ್ಯಕ್ರಮ ಸ್ಥಳದಲ್ಲಿ ನಿಯೋಜಿತರಾದ ಮೇಲ್ವಿಚಾರಕರು ಮತ್ತು ಅವರ ತಂಡ ಎಲ್ಲವನ್ನೂ ಕ್ರಮಬದ್ಧವಾಗಿ ನಡೆಸುತ್ತಿದ್ದಾರೆಯೇ ಎನ್ನುವುದನ್ನು ಸ್ವತಃ ನೋಡಬೇಕೆನ್ನುವುದು ನನ್ನ ಉದ್ದೇಶವಾಗಿತ್ತು.

ನನಗೆ ಆಶ್ಚರ್ಯ ಆಯಿತು. ಯಾಕೆಂದರೆ ಉಪವಿಭಾಗದ ವಿವಿಧ ಭಾಗಗಳಿಂದ ಬಹಳ ಕ್ಲಿಷ್ಟಕರವಾದ ಸುದೀರ್ಘ ಪ್ರಯಾಣ ಬೆಳೆಸಿ ಬಂದ ವಿದ್ಯಾರ್ಥಿಗಳಿಗೆ ಆಹಾರ ನೀಡಿರಲಿಲ್ಲ. ಆಹಾರದ ತಯಾರಿ ಇನ್ನೂ ನಡೆಯುತ್ತಿತ್ತು ಅಷ್ಟೇ. ಆದರೆ ಮೇಲ್ವಿಚಾರಕರು ಮತ್ತು ಅವರ ತಂಡದವರು ನಾವು ಹೈ ಟೀ ಎಂದು ಕರೆಯಬಹುದಾದದ್ದನ್ನು ಸೇವಿಸುತ್ತಾ, ತಿಂಡಿಗಳನ್ನು ಮೆಲ್ಲುತ್ತಾ ಮೋಜಿನಲ್ಲೇ ಇದ್ದರು. ಇಂತಹ ದೌರ್ಜನ್ಯಕಾರಿ ವರ್ತನೆ ಕಂಡಾಗ, ನಿಜವಾಗಿಯೂ ನಾನು ಒಪ್ಪಿಕೊಳ್ಳಲೇ ಬೇಕು, ನಾನು ನನ್ನ ನಿಯಂತ್ರಣ ಕಳೆದುಕೊಂಡೆ. ಆಗ ನಾನು ನಾನಾಗಿರಲೇ ಇಲ್ಲ. ನಾನು ಜೋರಾಗಿ ಬೊಬ್ಬೆ ಹಾಕಿದೆ. ನಾನು ನನ್ನ ಸಿಟ್ಟನ್ನು ಎಷ್ಟು ಚೆನ್ನಾಗಿ ಸಾಧ್ಯವೋ, ಅಥವಾ ಎಷ್ಟು ಕೆಟ್ಟದಾಗಿ ಸಾಧ್ಯವೋ ಹಾಗೆ ವ್ಯಕ್ತಪಡಿಸಿದೆ. ಆತ ನೀಡುತ್ತಿದ್ದ ವಿವರಣೆಗಳೆಲ್ಲ ನನ್ನ ಸಿಟ್ಟನ್ನು ಇನ್ನಷ್ಟು ತೀವ್ರಗೊಳಿಸಿತೇ ವಿನಾ ಬೇರೇನೂ ಅಲ್ಲ. ಯಾಕೆಂದರೆ, ನಿರೀಕ್ಷಿಸಿದ್ದಕ್ಕೆ ಒಪ್ಪಿಗೆಯಾಗುವಂತೆ ನೀಡಬಹುದಾದ ಯಾವ ವಿವರಣೆ ಕೂಡ ಇರಲಿಲ್ಲ. ಕೆಲವೇ ನಿಮಿಷಗಳಲ್ಲಿ ಆತ ಜೋರಾಗಿ ನಡುಗುತ್ತಾ ದೂರುತ್ತಾ ಕೊಠಡಿಯಿಂದ ಹೊರಟು ಹೋದರು. ಈಗ ಆ ಮಕ್ಕಳಿಗೆ ತ್ವರಿತಗತಿಯಲ್ಲಿ ಆಹಾರ ತಯಾರಿಸಿ ಕೊಡಬೇಕಾದ ಪರಿಸ್ಥಿತಿ ನನ್ನದಾಯಿತು.

ನಾನು ನನ್ನ ಯೌವ್ವನ (ಆಗ ನನಗೆ ಕೇವಲ 23ವರ್ಷ) ಅಥವಾ ಅನನುಭವವನ್ನಾಗಲೀ ದೂರುವುದಿಲ್ಲ. ಹಸಿದ ಮಕ್ಕಳ ದೃಶ್ಯ ನನ್ನ ಮನಸ್ಸನ್ನು ಕಲಕಿತ್ತು. ಮಕ್ಕಳ ಬಗೆಗಿನ ನನ್ನ ಅನುಭೂತಿ, ವಯಸ್ಸಾದ ಮೇಲ್ವಿಚಾರಕನ ಪ್ರತಿಕ್ರಿಯೆಯನ್ನಾಗಲೀ, ಅದರ ಸಾಧ್ಯಪರಿಣಾಮವನ್ನಾಗಲೀ ಕಲ್ಪಿಸಿಕೊಳ್ಳುವುದಕ್ಕೆ ನನಗೆ ಅವಕಾಶ ಮಾಡಿಕೊಡಲಿಲ್ಲ. ಆಗ ನನಗೆ ಆ ವ್ಯಕ್ತಿ ದೆವ್ವದ ಅವತಾರ ನನ್ನೆಡೆ ನೋಡುತ್ತಿರುವಂತೆ ಕಾಣಿಸಿದರು. ನನಗೆ ಈಗ ಅನ್ನಿಸುತ್ತದೆ. ಒಬ್ಬ ಅನುಭವಿ ಉಪ ಜಿಲ್ಲಾಧಿಕಾರಿ ಈ ಪ್ರಸಂಗವನ್ನು ಇನ್ನಷ್ಟು ಚೆನ್ನಾಗಿ ನಿರ್ವಹಿಸುತ್ತಿದ್ದರೋ ಏನೋ. ಇದರ ತೀರ್ಮಾನವನ್ನು ನಾನು ನಿಮಗೇ ಬಿಟ್ಟುಬಿಡುತ್ತೇನೆ. ಅಧಿಕಾರಶಾಹಿಯ ಜತೆಗಿನ ವಿದ್ಯಾರ್ಥಿಗಳ ಮತ್ತು ಅಧ್ಯಾಪಕರ ಮೊದಲ ಮುಖಾಮುಖಿಯ ಅನುಭವ ಇದೆಯಲ್ಲ, ಅದು ಕನಿಷ್ಠತಮದ್ದು ಮತ್ತು ಆಘಾತಕಾರಿಯಾದದ್ದು.

1966ರ ಜೂನ್‌ನಲ್ಲಿ(68ರ ವರೆಗೆ) ನನ್ನನ್ನು ಸಿದ್ಧಿ ಜಿಲ್ಲಾ ಮ್ಯಾಜಿಸ್ಟ್ರೇಟ್ ಆಗಿ ನೇಮಕ ಮಾಡಿದ್ದರು. ಅದು ಎರಡು ವರ್ಷಗಳಿಂದ ನಿರಂತರ ಭೀಕರ ಬರ ಎದುರಿಸುತ್ತಿದ್ದ ಜಿಲ್ಲೆ. ಅದಕ್ಕೆ ಮುಂಗಾರು ವೈಫಲ್ಯ ಕೂಡ ಕಾರಣ. ಇದರಿಂದಾಗಿ ಮೂರನೆಯ ವರ್ಷಕ್ಕೂ ಇದೇ ಪರಿಸ್ಥಿತಿ ಮುಂದುವರೆಯಿತು. ಅಲ್ಲಿನ ಅನುಭವ ('ಡಿಸ್ಟ್ರಿಕ್ಟ್ ಕಲೆಕ್ಟರ್ಸ್, ರಿಕಲೆಕ್ಟ್' ಎಂಬ ರಮೇಶ್ಚಂದ್ರ ಅರೋರ

ಮತ್ತು ಸಿಕೆ ಸಲ್ದಾನ ಅವರು ಸಂಪಾದಿಸಿದ ಪುಸ್ತಕದಲ್ಲಿ ಹೆಚ್ಚಿನ ಮಾಹಿತಿ ಇದೆ) ಆಧಾರದಲ್ಲಿ ಅತ್ಯಂತ ಕಡಿಮೆ ಆಹಾರ ಸರಬರಾಜು ಇರುವಾಗ ಬರಪರಿಸ್ಥಿತಿಯನ್ನು ಹೇಗೆ ನಿಭಾಯಿಸಬೇಕು ಎನ್ನುವ ಪರಿಣತಿ ನನಗಿದೆ ಎಂದು ನಾನು ಹೇಳಬಲ್ಲೆ. ಆದರೆ ಶಿಕ್ಷಣದ ಕುರಿತಾದ ಸೆಳೆತ ನಿಗ್ರಹಿಸಲಸಾಧ್ಯವಾದದ್ದೇ. ಬರದ ನಿರ್ವಹಣೆಯ ಒತ್ತಡದಲ್ಲಿದ್ದರೂ ದೊಡ್ಡಮಟ್ಟದಲ್ಲಿ ನಾನು ಶಿಕ್ಷಣದ ಕ್ಷೇತ್ರದಲ್ಲಿ ತೊಡಗಿಸಿಕೊಂಡೆ.

ಅದು ಮುಖ್ಯವಾಗಿ ಬುಡಕಟ್ಟು ಜನರೇ ಹೆಚ್ಚಾಗಿರುವ ಜಿಲ್ಲೆ. ಬುಡಕಟ್ಟು ಪ್ರದೇಶದಲ್ಲಿ ಪ್ರಯಾಣಿಸುತ್ತಿರುವಾಗ, ಅಲ್ಲಿನ ಶಾಲೆಗಳನ್ನು ಭೇಟಿ ಮಾಡುವ ಕಾರ್ಯಕ್ರಮ ಇಟ್ಟುಕೊಂಡೆ. ಅಲ್ಲಿನ ದಯನೀಯ ಗುಣಮಟ್ಟವನ್ನು ಪತ್ತೆ ಮಾಡಿದೆ. ಎಲಿಮೆಂಟರಿ ಶಾಲೆಗಳಲ್ಲಿ ಶಿಕ್ಷಣ ಸಂಪೂರ್ಣ ಗೈರುಹಾಜರಿ ಹಾಕಿದೆ ಎಂದರೆ ಅದೇನೂ ಅತಿಶಯೋಕ್ತಿಯಲ್ಲ. ಐದನೆಯ ತರಗತಿಯ ಮಕ್ಕಳಿಗೆ ಓದುವುದಕ್ಕೆ ಬರೆಯುವುದಕ್ಕೆ ಬರುತ್ತಿರಲಿಲ್ಲ. ಶಿಕ್ಷಕರು ತಮಗಿಂತ ಹಿಂದೆ ಇದ್ದವರನ್ನು ದೂರುತ್ತಿದ್ದರು. ಸಿಲ್ಹೊರಾದಲ್ಲಿನ ಶಾಲೆಗಳ ಗುಣಮಟ್ಟವನ್ನು ಈ ಶಾಲೆಗಳೊಂದಿಗೆ ಹೋಲಿಸಿದಾಗ ಗಮನಹರಿಸದೇ ಹೋದ ಪ್ರಾದೇಶಿಕ ಅಸಮಾನತೆ ನಾಟಕೀಯವಾಗಿ ವಿರೋಧಾಭಾಸದಂತೆ ಕಾಣಿಸುತ್ತದೆ. ನಾನು ಅಂದಿನ ಕಾಲದ ಶಿಕ್ಷಣ ಇಲಾಖೆಯ ಮುಖ್ಯಸ್ಥರಾದ ಸಾರ್ವಜನಿಕ ಶಿಕ್ಷಣ ನಿರ್ದೇಶಕರಿಗೆ ಬರೆದು ಶಾಲೆಯ ಕಡೆಗೆ ವಿಶೇಷ ಗಮನಹರಿಸುವಂತೆ ಮತ್ತು ಸೂಕ್ತ ಪರಿಹಾರ ಕ್ರಮಗಳನ್ನು ಕೈಗೊಳ್ಳುವಂತೆ ತಿಳಿಸಿದೆ. ನನ್ನ ನಿರಾಶೆಗೆ ಎಂಬಂತೆ ಅಲ್ಲಿಂದ ಯಾವುದೇ ಪ್ರತಿಕ್ರಿಯೆಯೂ ಬರಲಿಲ್ಲ. ಆದರೆ ವಿಷಾದಕರ ವಿಷಯ ಏನೆಂದರೆ ನನಗೆ ಬರಪರಿಸ್ಥಿತಿಯ ನಿರ್ವಹಣೆಯಲ್ಲಿ ಸಂಪೂರ್ಣ ತೊಡಗಿಸಿಕೊಳ್ಳಬೇಕಾಗಿ ಬಂದದ್ದರಿಂದ ಮತ್ತೆ ಇದೆಲ್ಲ ವಿಚಾರಿಸಲು ಸಮಯ ಸಿಗಲಿಲ್ಲ.

ಇನ್ನೊಂದು ಸಂದರ್ಭದಲ್ಲಿ ಶಿಕ್ಷಣದಲ್ಲಿ ನಾನು ಮಾಡಿದ ಹಸ್ತಕ್ಷೇಪ ಅಲೆ ಅಲೆಗಳ ಪರಿಣಾಮ ಉಂಟು ಮಾಡಿತು. ಈ ಕಥೆ ತುಂಬ ದೊಡ್ಡದು. ಅದು ನನಗೆ ಕಲ್ಪನಾತೀತ ಆಶ್ಚರ್ಯ–ಆಘಾತಗಳ ಸರಣಿಯನ್ನೇ ತಂದಿತು. ಇದೆಲ್ಲವನ್ನೂ ನಾನು ಎಷ್ಟು ಸಾಧ್ಯವೋ ಅಷ್ಟು ಚಿಕ್ಕದಾಗಿ ನಿರೂಪಿಸುತ್ತೇನೆ. ಸಿಧಿ ಮತ್ತು ಅಕ್ಕಪಕ್ಕದ ಜಿಲ್ಲೆಗಳೆಲ್ಲ ಪರೀಕ್ಷೆಗಳಲ್ಲಿ ಸಾಮೂಹಿಕ ನಕಲಿಗೆ ಹೊಡೆಯುವುದಕ್ಕೇ ಕುಖ್ಯಾತವಾಗಿದ್ದ ಕಾಲ. ನ್ಯಾಯಯುತ ಪರೀಕ್ಷೆ ನಡೆಸಬೇಕೆಂದು ನಾನು ನಿರ್ಧರಿಸಿದೆ. ಇದನ್ನು ನಾನು ಜಿಲ್ಲಾ ಕೇಂದ್ರದಲ್ಲಿ ಮಾಡಿಯೂ ಇದ್ದೆ. ಬೋರ್ಡ್ ಆಫ್ ಸೆಕೆಂಡರಿ ಎಜುಕೇಷನ್‌ನ ಪರೀಕ್ಷೆಗಳಲ್ಲಿ ಇದು ಯಶಸ್ಸು ಕಂಡಿತ್ತು ಕೂಡ. ಆದರೆ ವಿಶ್ವವಿದ್ಯಾಲಯ ಪರೀಕ್ಷೆಗಳಿಗೆ ಸಂಬಂಧಿಸಿದಂತೆ ಈ ಪ್ರಯೋಗ ಕಠಿಣ ಎನ್ನಿಸಿತು. ಜಿಲ್ಲೆಯಲ್ಲಿ ಕೇವಲ ಒಂದೇ ಒಂದು ಕಾಲೇಜು ಇತ್ತು. ಸಾಗರ್ ವಿಶ್ವವಿದ್ಯಾಲಯದ ಕುಲಪತಿಗಳಿಗೆ ಪತ್ರ ಬರೆದು ಸಾಮೂಹಿಕ ನಕಲು ನಡೆಯುತ್ತಿರುವುದನ್ನು ತಿಳಿಸಿ, ನ್ಯಾಯಯುತ ಪರೀಕ್ಷೆಗೆ ತೆಗೆದುಕೊಳ್ಳಬೇಕಾದ ತಕ್ಷಣದ ಕ್ರಮಗಳ ಕುರಿತು ಸಲಹೆ ನೀಡಿದೆ. ಆದರೆ ಆ ಕಡೆಯಿಂದ ಹತಾಶೆಯ ಮೌನ. ಸಲಹೆ ಜ್ಯಾರಿಗೆ ತರುವುದು ಬಿಟ್ಟು ಅವರೊಂದು ಪತ್ರ ಬರೆದರು. ಅದರಲ್ಲಿ ಪರೀಕ್ಷಾ ಕೇಂದ್ರಕ್ಕೆ ಭೇಟಿ ನೀಡಿ ತಪಾಸಣೆ ನಡೆಸಲು ಅನುವುಮಾಡಿಕೊಟ್ಟದ್ದಾಗಿ ತಿಳಿಸಿದ್ದರು. ಆ ದಿನಗಳಲ್ಲಿ ಪರೀಕ್ಷೆಗಳಲ್ಲಿ ಜಿಲ್ಲಾ ದಂಡಾಧಿಕಾರಿಯವರ ಪಾತ್ರ ಊಹಾತೀತವಾಗಿತ್ತು.

ನನಗೆ ಬರಗಾಲದ ನಿರ್ವಹಣೆಯ ಕೆಲಸವೇ ಕೈತುಂಬಾ ಇತ್ತು. ಮೇಲಾಗಿ ವೈಯಕ್ತಿಕವಾಗಿ ಭಾಗಿಯಾಗಬೇಕೆಂಬ ಸಣ್ಣ ಆಸೆಯೂ ನನ್ನಲ್ಲಿ ಇದ್ದಿರಲಿಲ್ಲ. ನನ್ನ ಸಲಹೆಯ ಪ್ರಕಾರ ಅವರು ಕಾರ್ಯನಿರ್ವಹಿಸಿಯಾರು ಎಂಬ ನಿರೀಕ್ಷೆ ನನ್ನಲ್ಲಿತ್ತು. ಅವರು ಏನೇ ಸಹಾಯ ಕೇಳಿದರೂ ಜಿಲ್ಲಾ ಆಡಳಿತ ನೀಡುತ್ತಿತ್ತು. ಈ ಉಪಕ್ರಮ ಆರಂಭಿಸಿದ ನಂತರ ನನಗೆ ಹಿಂಜರಿಯಬೇಕೆಂದೆನಿಸಲಿಲ್ಲ. ಯಾಕೆಂದರೆ ನ್ಯಾಯೋಚಿತ ಪರೀಕ್ಷೆ ಖಾತರಿಪಡಿಸಬೇಕೆನ್ನುವುದು ನನ್ನ ಭಾರೀ ಇರಾದೆಯಾಗಿತ್ತು.

ಪರೀಕ್ಷೆಯ ಗಡಿಬಿಡಿಯ ಒಂದು ದಿನ ನಾನು ಇದ್ದಕ್ಕಿದ್ದ ಹಾಗೆ ತಪಾಸಣೆಗೆ ಹೊರಟೆ. ಅಲ್ಲಿನ ದೃಶ್ಯ ನೋಡಿ ನನಗೇ ಆಘಾತವಾಗಿತ್ತು. ಅಲ್ಲಿ ಮುಕ್ತ ನಕಲು ಮುಂದುವರೆದಿತ್ತು. ಹೆಚ್ಚು ಕಡಿಮೆ ಪ್ರತಿವಿದ್ಯಾರ್ಥಿ ಕೂಡ ತನ್ನ ಡೆಸ್ಕ್‌ನ ಮೇಲೆ ಕೆಲವು ಪುಸ್ತಕಗಳನ್ನು ಇರಿಸಿದ್ದ. ಇನ್ನೂ ಕೆಲವರು ಪಕ್ಕದ ಬ್ಯಾಗ್‌ನಲ್ಲಿ ಪುಸ್ತಕಗಳನ್ನು ಇರಿಸಿದ್ದರು. ಸಾಮೂಹಿಕ ನಕಲು ಮಾಡುವವರ ಪ್ರಮಾಣ ಮತ್ತು ಮುಕ್ತತೆ ನನ್ನ ಕಲ್ಪನೆಗೂ ಮೀರಿದ್ದಾಗಿತ್ತು. ನಾನು ಎಲ್ಲ ವಸ್ತುಗಳನ್ನು ವಶಕ್ಕೆ ಪಡೆದುಕೊಂಡೆ. 8*4 ಉದ್ದಗಲ ಇರುವ 3 ಅಡಿ ಎತ್ತರ ಇರುವ ಪೆಟ್ಟಿಗೆ ತುಂಬ ಅಲ್ಲಿ ಸಿಕ್ಕ ವಸ್ತುಗಳನ್ನು ತುಂಬಿ ರಿಜಿಸ್ಟ್ರಾರ್‌ಗೆ ಕಳುಹಿಸಿ ಜತೆಗೊಂದು ವರದಿಯನ್ನೂ ಇರಿಸಿದ್ದೆ. ಅದರಲ್ಲಿ ವಿವಿಯ ಲೈಬ್ರರಿಯನ್ನು ತುಂಬುವುದರ ಮೂಲಕ ಸಾಮೂಹಿಕ ನಕಲಿನ ಪ್ರಯೋಜನವನ್ನು ಪಡೆಯುವಂತೆ ವ್ಯಂಗ್ಯಪೂರಿತವಾಗಿ ಸಲಹೆ ನೀಡಿದೆ.

ಮತ್ತೊಮ್ಮೆ ಸುದೀರ್ಘ ಕಾಲದ ವರೆಗೆ ಕ್ರಮಕೈಗೊಂಡ ಬಗ್ಗೆಯಾಗಲೀ, ಕ್ರಮಕೈಗೊಳ್ಳುವುದಕ್ಕೆ ವಿಶ್ವವಿದ್ಯಾಲಯಕ್ಕೆ ಪ್ರಸ್ತಾಪಿಸಿದ ಕುರಿತಾಗಲೀ ಯಾವುದೇ ಮಾಹಿತಿ ನನಗೆ ಸಿಗಲಿಲ್ಲ. ಶಾಲೆ ಮತ್ತು ಉನ್ನತ ಶಿಕ್ಷಣ ಮಟ್ಟ ಎರಡರಲ್ಲೂ ಶೈಕ್ಷಣಿಕ ಅಧಿಕಾರಶಾಹಿ ಇಷ್ಟೊಂದು ಅಸಮರ್ಥವಾಗಿದೆಯೇ ಎಂದು ಆಶ್ಚರ್ಯಪಟ್ಟೆ. ಸಾಮೂಹಿಕ ನಕಲಿನ ದೃಶ್ಯ ನನ್ನನ್ನು ಕಾಡುತ್ತಿರುವ ದುಸ್ವಪ್ನ ಎನ್ನುವುದಷ್ಟೇ ಸಾಬೀತಾಯಿತು. ಹಾಗಾಗಿ, ಈಗಾಗಲೇ ತೊಡಗಿಕೊಂಡ ಉಳಿದೆಲ್ಲ ಕೆಲಸ ಕಾರ್ಯಗಳಿಗಿಂತ ನ್ಯಾಯಯುತ ಪರೀಕ್ಷೆ ನಡೆಯುವುದನ್ನು ಖಾತರಿಪಡಿಸುವುದೇ ನನ್ನ ಕಾರ್ಯಸೂಚಿ ಆಗಿಬಿಟ್ಟಿತು. ಈ ಕಾರ್ಯಾಚರಣೆಯಲ್ಲಿ ಈ ಶಿಕ್ಷಣ ಕ್ಷೇತ್ರಕ್ಕೆ ಸಂಬಂಧಿಸಿದ ಎಲ್ಲ ಪಾಲುದಾರರ ಜತೆಗೆ ಚರ್ಚಿಸುವ ತಂತ್ರವನ್ನು ಬಳಸಲು ನಿರ್ಧರಿಸಿದೆ. ಹಾಗೆ, ನಾನು ಕಾಲೇಜಿಗೆ ತೆರಳಿ ವಿದ್ಯಾರ್ಥಿಗಳನ್ನು ಭೇಟಿ ಮಾಡಿ ನಕಲು ನಿಲ್ಲಿಸಲು ಮನವಿ ಮಾಡಿದೆ. ಚೆನ್ನಾಗಿ ಓದುವುದು ಮತ್ತು ನೈಜ ಸಾಧನೆಯ ಆಧಾರದಲ್ಲಿ ಉತ್ತಮ ಅಂಕ ಮತ್ತು ಪ್ರಮಾಣ ಪತ್ರ ಗಳಿಸುವುದು ಹೇಗೆ ಅವರದೇ ಹಿತಾಸಕ್ತಿಯಿಂದ ಮುಖ್ಯ ಎಂದು ಹೇಳಿದೆ. ಉದ್ಯೋಗದಲ್ಲಿ ಮತ್ತು ಬದುಕಿನಲ್ಲಿ ಸಾಧಿಸುವುದಕ್ಕೆ ಇದೆಲ್ಲ ಎಷ್ಟು ಅಗತ್ಯ ಎಂದು ವಿವರಿಸಿದೆ. ತಮ್ಮ ಆರ್ಥಿಕ ಸ್ಥಿತಿಗತಿಗಳನ್ನು ಮುಂದೊತ್ತಿಕೊಂಡು ಅವರು ನಾಚಿಕೆಯಿಲ್ಲದೆ ನಕಲುಗೀಳನ್ನು ಬಹಳ ಗಟ್ಟಿಯಾಗಿ ಮತ್ತು ಬಹಿರಂಗವಾಗಿ ಸಮರ್ಥಿಸುವುದು ಕಂಡು ನಾನು ಮೂಕವಿಸ್ಮಿತನಾದೆ. ತಮ್ಮ ವಾದವನ್ನು ಬೆಂಬಲಿಸುವುದಕ್ಕಾಗಿ ಅವರು ಅನೇಕ ಕಾಲ್ಪನಿಕ ವಾದಗಳನ್ನು ಮುಂದಿಡುತ್ತಿದ್ದರು. ಹೆತ್ತವರ ಜತೆಗಿನ ಮಾತುಕತೆ ನಿಗದಿಪಡಿಸಲಾಯಿತು. ಆದರೆ ಮಕ್ಕಳು ತಮ್ಮ ಹೆತ್ತವರ ಮೇಲೆ ಪ್ರಭಾವ ಬೀರಿದ್ದರಿಂದ ಸಭೆ ಅರ್ಧಕ್ಕೇ ಮೊಟಕುಗೊಂಡಿತು. ವಿದ್ಯಾರ್ಥಿಗಳ

ಬೆದರಿಕೆಯ ಹಿನ್ನೆಲೆಯಲ್ಲಿ ಅಧ್ಯಾಪಕರೂ ತಮ್ಮ ಅಸಹಾಯಕತೆ ತೋಡಿಕೊಂಡರು. ಪೂರ್ಣ ಭದ್ರತೆಯನ್ನು ಒದಗಿಸುವ ನನ್ನ ಭರವಸೆಯಿಂದ ಅವರು ತೃಪ್ತರಾಗಲೇ ಇಲ್ಲ. ಅವರ ವಾದವೇನೆಂದರೆ ಭದ್ರತೆ ಜೀವನಪೂರ್ತಿ ಪಡೆದುಕೊಳ್ಳುವುದು ಸಾಧ್ಯವಿಲ್ಲ ಎನ್ನುವುದೇ ಆಗಿತ್ತು. ಭದ್ರತೆಯನ್ನು ಹಿಂದೆಗೆದುಕೊಂಡರೆ ತಮ್ಮ ಪರಿಸ್ಥಿತಿ ಇನ್ನಷ್ಟು ಚಿಂತಾಜನಕ ಎಂಬ ಭಾವನೆ ಅವರನ್ನು ಕಾಡಿತ್ತು. ಇದಕ್ಕೆ ಪೂರಕವಾಗಿ, ಅಧ್ಯಾಪಕರುಗಳನ್ನು ಕಾಲಾನಂತರದಲ್ಲಿ ಆಕ್ರಮಿಸಿದ ಉದಾಹರಣೆಗಳನ್ನೂ ನೀಡಿದರು.

ಮಾತುಕತೆಯ ತಂತ್ರಗಳೆಲ್ಲ ನಿಂತು ಹೋದ ನಂತರ, ನಾನು ನನ್ನ ಪರ್ಯಾಯ ತಂತ್ರವನ್ನು ರೂಪಿಸುವುದಕ್ಕೆ ಆರಂಭಿಸಿದೆ. ಇದೊಂದು ಬಗೆಯ ಆಘಾತಕಾರಿ ತಂತ್ರ. ಪರೀಕ್ಷಾ ಕೇಂದ್ರವನ್ನು ಆ ಜಿಲ್ಲೆಯಲ್ಲಿ ಮುಂದುವರಿಸದೇ ಇರುವ ನಿರ್ಧಾರದ ಮೂಲಕ ವಿಶ್ವವಿದ್ಯಾಲಯ ತನ್ನ ಮೌನ ಮುರಿಯಿತು, ನಿಷ್ಕ್ರಿಯತೆಯನ್ನು ನಿಲ್ಲಿಸಿತು. ಪಕ್ಕದ ರೇವಾವನ್ನು ಈ ಉದ್ದೇಶಕ್ಕಾಗಿ ನಿಗದಿ ಮಾಡಿತು. ಅಲ್ಲೇನೂ ಸಾಮೂಹಿಕ ನಕಲು ಇಲ್ಲವೆಂಬ ಭಾವನೆ. ಆದರೆ ಸುತ್ತಮುತ್ತಣ ಎಲ್ಲ ಜಿಲ್ಲೆಗಳೂ ಸಮಾನವಾಗಿ ಮತ್ತು ಅತ್ಯಂತ ಕೆಟ್ಟದ್ದಾಗಿ ಈ ಪಿಡುಗಿನಿಂದ ಬಳಲುತ್ತಿರುವವುಗಳೇ ಆಗಿದ್ದುವು.

ಇದು ವಿದ್ಯಾರ್ಥಿಗಳ ಪ್ರತಿಭಟನೆಯ ವರೆಗೆ, ತನ್ಮೂಲಕ ನಗರದ ಜನಜೀವನವನ್ನು ಸ್ತಬ್ಧಗೊಳಿಸುವ ವರೆಗೆ ಮುಂದುವರೆಯಿತು. ಮೊತ್ತಮೊದಲ ಬಾರಿಗೆ ಬಲಪ್ರಯೋಗ ಮಾಡಬೇಕಾಗಿ ಬಂತು. ಅದು ನನ್ನ ವೃತ್ತಿಜೀವನದಲ್ಲೇ ನಡೆಸಿದ ಏಕೈಕ ಬಲಪ್ರಯೋಗ. ನಗರದಲ್ಲಿ ಕರ್ಫ್ಯೂ ಜಾರಿ ಮಾಡಬೇಕಾಗಿ ಬಂತು. ಹಿಂದೆಂದೂ ಕಂಡರಿಯದಂತಹ ಸಂಘರ್ಷ ಅದು. ಆಸ್ಪತ್ರೆಗೆ ಒಯ್ಯಲಾಗುತ್ತಿದ್ದ ರೋಗಿಗಳ ಜೀವ ಉಳಿಸುವುದಕ್ಕೆ ಅಗತ್ಯವಾಗಿದ್ದ ಆಕ್ಸಿಜನ್ ಸಿಲಿಂಡರ್‌ಗಳನ್ನು ವಿದ್ಯಾರ್ಥಿಗಳು ಅರ್ಧದಾರಿಯಲ್ಲೇ ತಡೆದರು. ನೇರ ಮಾತುಕತೆ, ಸಹಾಯಕ ಮಧ್ಯಸ್ಥಿಕೆ ಜತೆಗೆ ಸೇನೆಯ ಬಳಕೆ ಇವೆಲ್ಲವುಗಳ ಹದವಾದ ಸಮ್ಮಿಶ್ರಣದ ತಂತ್ರದ ಮೂಲಕ ಪ್ರತಿಭಟನೆ ಹತ್ತುದಿನಗಳಲ್ಲಿ ಅಂತ್ಯಕಂಡಿತು. ಸೀಮಿತ ಪೋಲಿಸ್ ಬಲ ಮತ್ತು ಸಂಪನ್ಮೂಲ ಬಳಸಿ ಸಣ್ಣ ಪಟ್ಟಣಗಳಲ್ಲಿ ಕಾನೂನು ವ್ಯವಸ್ಥೆಯ ನಿಯಂತ್ರಣದಲ್ಲಿ ಭಾಗವಹಿಸದೇ ಇರುವವರಿಗೆ ಈ ಕಾರ್ಯಾಚರಣೆಯ ಸಂಕಷ್ಟವನ್ನು ಕಲ್ಪಿಸುವುದೂ ಸಾಧ್ಯವಿಲ್ಲ. ಮರುದಿನದ ತಂತ್ರ ಯೋಜಿಸುವುದಕ್ಕಾಗಿ ಬಹುತೇಕ ರಾತ್ರಿಗಳು ಬಳಕೆಯಾಗುತ್ತಿದ್ದವು. ಹಗಲು ಅದರ ಅನುಷ್ಠಾನದಲ್ಲಿ ತುಂಬಿ ಹೋಗುತಿದ್ದವು. ಇದೆಲ್ಲದರ ಕೊನೆಯಲ್ಲಿ, ಇದರಲ್ಲಿ ನೇರ ಭಾಗಿಯಾಗಿದ್ದವರಂತೂ ಸಂಪೂರ್ಣವಾಗಿ ಸುಸ್ತಾಗಿದ್ದೆವು.

ಇಷ್ಟೊಂದು ಕೋಪ ಮತ್ತು ಹತಾಶೆ ಈ ಹಿಂದೆ ನಾನು ಅನುಭವಿಸಿಯೇ ಇರಲಿಲ್ಲ. ಪ್ರತಿಭಟನೆ ಎಲ್ಲ ಮುಗಿದ ಮೇಲೆ ವಿಶ್ವವಿದ್ಯಾಲಯದಿಂದ ನನಗೊಂದು ಪತ್ರ ಬಂತು. ಅದು ಪ್ರತಿಭಟನೆ ಆರಂಭವಾದ ಅದೇ ದಿನ ವಿಶ್ವವಿದ್ಯಾಲಯದ ವಿಶ್ವವಿದ್ಯಾಲಯದ ಕಾರ್ಯಕಾರಿ ಸಮಿತಿ ತೆಗೆದುಕೊಂಡ ನಿರ್ಧಾರದ ಕುರಿತ ಪತ್ರ. ಅದು ಸಿದ್ಧಿಯಲ್ಲಿನ ಪರೀಕ್ಷಾ ಕೇಂದ್ರವನ್ನು ಸ್ಥಗಿತಕೊಳಿಸಬೇಕೆಂಬ ಈ ಹಿಂದಿನ ನಿರ್ಧಾರಕ್ಕೆ ತಿದ್ದುಪಡಿ ತಂದು, ಅಲ್ಲಿ ಕೇಂದ್ರ

ಮುಂದುವರಿಯುವುದಕ್ಕೆ ತೀರ್ಮಾನಿಸಿದ್ದ ಕುರಿತ ಪತ್ರ. ಅಂದಿನ ಪತ್ರಿಕೆಗಳ ದೊಡ್ಡ ಸುದ್ದಿಯಾಗಿದ್ದ ಪ್ರತಿಭಟನೆಯ ಪರಿಸ್ಥಿತಿ ಇನ್ನಷ್ಟು ಬಿಗಡಾಯಿಸುತ್ತಿದೆ ಎಂಬ ಸಂಪೂರ್ಣವಾದ ಅರಿವಿದ್ದಾಗಲೂ ವಿಶ್ವವಿದ್ಯಾಲಯದ ಅಧಿಕಾರಶಾಹಿಯ ಇಂತಹ ಸಂವೇದನಾರಹಿತತೆ ಕ್ಷಮ್ಯವೆ? ಮೊದಲ ದಿನವೇ ದೂರವಾಣಿಯಲ್ಲಿ ಈ ಸಂದೇಶವನ್ನು ಕಳುಹಿಸಿರುತ್ತಿದ್ದರೆ ಪ್ರತಿಭಟನೆ ಅಂದೇ ಮುಕ್ತಾಯಗೊಳ್ಳುತ್ತಿತ್ತು. ಆದರೆ ವಿಶ್ವವಿದ್ಯಾಲಯದ ಅಧಿಕಾರಶಾಹಿಯ ಅಕ್ಷಮ್ಯ ಮತ್ತು ದೌರ್ಜನ್ಯದ ರೀತಿಯ ಸಂವೇದನಾರಹಿತತೆ ಮತ್ತು ನಿಷ್ಕ್ರಿಯತೆ ಕಾರಣದಿಂದಾಗಿ ಇಡಿಯ ತಂಡ ಕಾನೂನು ಮತ್ತು ವ್ಯವಸ್ಥೆಯ ಪರಿಸ್ಥಿತಿಯನ್ನು ನಿರ್ವಹಿಸಬೇಕಾಗಿ ಬಂತು. ಅದಲ್ಲದಿದ್ದರೆ ವಿದ್ಯಾರ್ಥಿಗಳಾಗಲೀ, ಇಡಿಯ ನಗರವಾಗಲೀ ಇಂತಹ ನಭೂತೋ ಎನ್ನುವಂತಹ ಒತ್ತಡಕ್ಕೆ ಒಳಗಾಗ ಬೇಕಾದ, ಕಠಿಣ ಪರಿಸ್ಥಿತಿ ಎದುರಿಸಬೇಕಾದ ಮತ್ತು ಆತಂಕ ಪಡಬೇಕಾದ ಅಗತ್ಯವೇ ಬರುತ್ತಿರಲಿಲ್ಲ.

ಘಟನಾನಂತರದ ಅವಲೋಕನ ಎಂಬಂತೆ ನಾನು ಇಲ್ಲಿ ವಾಸ್ತವ ಮತ್ತು ರಹಸ್ಯಗಳನ್ನು ಹಂಚಿಕೊಳ್ಳುತ್ತೇನೆ. ಸಾಮೂಹಿಕ ನಕಲಿನ ಬಗೆಗೆ ಸಾಕಷ್ಟು ಗಟ್ಟಿ ಸಾಕ್ಷ್ಯಗಳಿದ್ದರೂ, ವಾಸ್ತವ ಎಂದರೆ ವಿಶ್ವವಿದ್ಯಾಲಯವು ತೆಗೆದುಕೊಂಡ ನಿರ್ಧಾರ ವಿದ್ಯಾರ್ಥಿಗಳ ಒಳಗೇ ಇದ್ದ ಸಮಾಜವಿರೋಧಿ ಶಕ್ತಿಗಳಿಗೆ ಉತ್ತೇಜನ ನೀಡಿತೇ ವಿನಾ ಬೇರೇನನ್ನೂ ಅಲ್ಲ; ಅವರೇ ಮುಂದಿನ ಪರೀಕ್ಷೆಯ ಹೊತ್ತಿಗೆ (ನಾನು ಆಗ ಮತ್ತೊಂದು ಜಿಲ್ಲೆಗೆ ವರ್ಗಾ ಆಗಿದ್ದೆ) ಪ್ರಶ್ನೆ ಪತ್ರಿಕೆಗಳನ್ನು ಭದ್ರವಾಗಿ ಇರಿಸಿದ್ದ ಕಟ್ಟಡಕ್ಕೆ ಬೆಂಕಿ ಹಚ್ಚಿದ್ದರು. ಇದು ನನ್ನ ನಂತರ ಬಂದ ಉತ್ತರಾಧಿಕಾರಿಗೆ ಕಾನೂನು ಸುವ್ಯವಸ್ಥೆಯ ಇನ್ನೊಂದು ಸಮಸ್ಯೆಯನ್ನು ತಂದು ಕೊಟ್ಟಿತು.

ಇಲ್ಲಿನ ರಹಸ್ಯ ಏನೆಂದರೆ ಸಾಮೂಹಿಕ ನಕಲನ್ನು ಮೂಲೋತ್ಪಾಟನೆ ಮಾಡುವುದಕ್ಕೆ ನಾನು ಕೈಗೊಂಡ ಕ್ರಮವೇ ಇನ್ನೊಂದು ಜಿಲ್ಲೆಗೆ ನನ್ನ ವರ್ಗಾವಣೆಯಲ್ಲಿ ಪ್ರಧಾನ ಪಾತ್ರ ವಹಿಸಿತು. ಇದರಿಂದ ಬಹಿರಂಗವಾದದ್ದೇನೆಂದರೆ ಜಿಲ್ಲೆಯ ಮುಖ್ಯರಾಜಕೀಯ ಪಕ್ಷಗಳ ನೇತಾರರು ಇಂತಹ ಒಂದು ಪಿಡುಗು ಮುಂದುವರೆಯುವುದಕ್ಕೆ ಅನುಕೂಲ ಆಗಿಯೇ ಇದ್ದರು.

ಇಲ್ಲಿ ನನಗೆ ಯಾವುದೇ ಪಶ್ಚಾತ್ತಾಪ ಇಲ್ಲ: ಶಿಕ್ಷಣದ ಕುರಿತ ಸಾಂಗತ್ಯ ಮುಂದುವರೆಸುವುದಕ್ಕೆ ಇವೆಲ್ಲ ಸಹಾಯಕ ಅಂಶಗಳೇ ಆಗಿವೆ.